ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಖಾಲಿ ಹುದ್ದೆಗಳ ಭರ್ತಿಗೆ ಆರ್ಥಿಕ ಮಿತವ್ಯಯ ಸಡಿಲಿಕೆ ಬಗ್ಗೆ

ಶ್ರೀ ಅರುಣ ಶಹಾಪುರ(ಶಿಕ್ಷಕರ ಕ್ಷೇತ್ರ) –

11 (01) ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಅನುದಾನಿತ ಪ್ರಾಥಮಿಕ, ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿರುವ ಹುದ್ದೆಗಳನ್ನು ಭರ್ತಿ ಮಾಡುವ ಕುರಿತಂತೆ ಆರ್ಥಿಕ ಇಲಾಖೆಯು ಆರ್ಥಿಕ ಮಿತವ್ಯಯದ ಆದೇಶ ಹೊರಡಿಸಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ತಡೆಹಿಡಿಯಲಾಗಿದೆಯೇ;

(ಆ) ಹಾಗಿದ್ದಲ್ಲಿ, ಪ್ರಸ್ತುತ ಎಷ್ಟು ಹುದ್ದೆಗಳನ್ನು ಭರ್ತಿ ಮಾಡುಲು ಅನುಮತಿ ನೀಡಲಾಗಿತ್ತು; (ಪ್ರಾಥಮಿಕ, ಪ್ರೌಢ ಹಾಗೂ ಪದವಿ ಪೂರ್ವ ಕಾಲೇಜುಗಳ ಹುದ್ದೆವಾರು ವಿವರ ನೀಡುವುದು)

(ಇ) ಈಗಾಗಲೇ ಶಿಕ್ಷಣ ಸಂಸ್ಥೆಗಳು ಹುದ್ದೆಗಳನ್ನು ಇಲಾಖೆಯ ನಿಯಮಗಳಿಗುಣವಾಗಿ ಅಧಿಸೂಚನೆ ಹೊರಡಿಸಿ, ನೇಮಕ ಮಾಡಿ ವೇತನ ಪಡೆಯುವ ಹಂತಕ್ಕೆ ಬಂದಿರುವ ಪ್ರಸ್ತಾವನೆಗಳ ಸಂಖ್ಯೆ ಎಷ್ಟು ಮತ್ತು ಯಾವುವು; (ಶಿಕ್ಷಣ ಸಂಸ್ಥೆವಾರು ಪ್ರಾಥಮಿಕ, ಪ್ರೌಢ ಹಾಗೂ ಪದವಿ ಪೂರ್ವ ಕಾಲೇಜುಗಳ ವಿವರ ನೀಡುವುದು)

(ಈ) ಈಗಾಗಲೇ ಹುದ್ದೆ ಭರ್ತಿ ಮಾಡಲು ಆರ್ಥಿಕ ಇಲಾಖೆಯ ಅನುಮತಿ ದೊರೆತಿರುವ ಹುದ್ದೆಗಳ ಸಂಖ್ಯೆ ಎಷ್ಟು; ಅವು ಯಾವುವು; (ಶಿಕ್ಷಣ ಸಂಸ್ಥೆವಾರು ವಿವರ ನೀಡುವುದು)

(ಉ) ಆರ್ಥಿಕ ಇಲಾಖೆಯು ಹೊರಡಿಸಿರುವ ಆರ್ಥಿಕ ಮಿತವ್ಯಯದ ಆದೇಶವನ್ನು ಹಿಂಪಡೆಯುವಂತೆ ಅಥವಾ ಸಡಿಲಗೊಳಿಸುವಂತೆ ಈಗಾಗಲೇ ಪ್ರಸ್ತಾವನೆಯನ್ನು ಶಿಕ್ಷಣ ಇಲಾಖೆಯು ಮಂಡಿಸಿದೆಯೇ; ಮಂಡಿಸಿದ್ದಲ್ಲಿ, ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಈ ಕುರಿತು ಬಂದಿರುವ ಶಿಫಾರಸ್ಸುಗಳ ಪ್ರತಿ ನೀಡುವುದು;

(ಊ) ಈ ಆದೇಶವನ್ನು ಸಡಿಲಗೊಳಿಸಿ ಖಾಲಿ ಹುದ್ದೆಗಳ ಭರ್ತಿಗೆ ಹಾಗೂ ವೇತನದ ಹಂತಕ್ಕೆ ಬಂದ ಪ್ರಸ್ತಾವನೆಗಳನ್ನು ಅನುಮೋದಿಸಿ ವೇತನ ಬಿಡುಗಡೆಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು?